





(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. (ಸಂದೇಶವಾಹಕರೇ) ಓದಿರಿ, ನಿಮ್ಮನ್ನು ಸೃಷ್ಟಿಸಿದ ನಿಮ್ಮ ಪ್ರಭುವಿನ ನಾಮದೊಂದಿಗೆ.

اِقْرَاْ بِاسْمِ رَبِّكَ الَّذِىْ خَلَقَ ۝١

2. ಅವನು, ಹೆಪ್ಪುಗಟ್ಟಿದ ರಕ್ತದ ಒಂದು ಪಿಂಡದಿಂದ ಮಾನವನನ್ನು ಸೃಷ್ಟಿಸಿದನು.

خَلَقَ الْاِنْسَانَ مِنْ عَلَقٍ ۝٢

3. ಓದಿರಿ, ಮತ್ತು ನಿಮ್ಮ ಪ್ರಭು ಮಹಾ ಉದಾರಿ-

اِقْرَاْ وَرَبُّكَ الْاَكْرَمُ ۝٣

4. ಅವನು ಲೇಖನಿಯ ಮೂಲಕ ವಿದ್ಯೆ ಕಲಿಸಿದನು-

الَّذِىْ عَلَّمَ بِالْقَلَمِ ۝٤

5. ಮಾನವನು ತಿಳಿದಿರದಂತಹ ಜ್ಞಾನವನ್ನು ಅವನಿಗೆ ದಯ ಪಾಲಿಸಿದನು.[1]

عَلَّمَ الْاِنْسَانَ مَا لَمْ يَعْلَمْ ۝٥

6. ಸರ್ವಥಾ ಅಲ್ಲ![2] ಮಾನವನು ವಿದ್ರೋಹವೆಸಗುತ್ತಾನೆ-

كَلَّآ اِنَّ الْاِنْسَانَ لَيَطْغٰٓى ۝٦

7. ತನ್ನನ್ನು ಸರ್ವಸ್ವತಂತ್ರನೆಂದು ಕಂಡು.

اَنْ رَّاٰهُ اسْتَغْنٰى ۝٧

8. (ವಸ್ತುತಃ ಅವನಿಗೆ) ನಿನ್ನ ಪ್ರಭುವಿನ ಕಡೆಗೇ ಖಂಡಿತ ಮರಳಬೇಕಾಗಿದೆ.

اِنَّ اِلٰى رَبِّكَ الرُّجْعٰى ۝٨

9-10. ಒಬ್ಬ ದಾಸನು ನಮಾಝ್ ಮಾಡುತ್ತಿರುವಾಗ ಅವನನ್ನು ತಡೆಯುವ ವ್ಯಕ್ತಿಯನ್ನು ನೀವು ಕಂಡಿರಾ?

اَرَءَيْتَ الَّذِىْ يَنْهٰى ۝٩
عَبْدًا اِذَا صَلّٰى ۝١٠

1. ಇದು ಪ್ರವಾದಿವರ್ಯರ(ಸ) ಮೇಲೆ ಅವತೀರ್ಣಗೊಂಡ ಪವಿತ್ರ ಕುರ್‌ಆನಿನ ಪ್ರಪ್ರಥಮ ವಾಣಿಯಾಗಿದೆ.

2. ಅವರು ಪ್ರವಾದಿತ್ವದ ಪದವಿಗೆ ನಿಯೋಗಿಸಲ್ಪಟ್ಟ ನಂತರ ಹರಮ್‌ನಲ್ಲಿ ನಮಾಝ್ ಮಾಡಲಿಚ್ಛಿಸಿದಾಗ ಅಬೂಜಹಲ್ ಅವರನ್ನು ತಡೆಯ ಬಯಸಿದ ಸಂದರ್ಭದಲ್ಲಿ ಈ ಸೂಕ್ತಗಳು ಅವತೀರ್ಣಗೊಂಡವು.

11. ನಿಮ್ಮ ಅಭಿಪ್ರಾಯವೇನು? (ಆ ದಾಸನು) ಸನ್ಮಾರ್ಗದಲ್ಲಿದ್ದರೆ-
أَرَءَيْتَ إِن كَانَ عَلَى الْهُدَىٰٓ ۝١١

12. ಅಥವಾ ಧರ್ಮನಿಷ್ಠೆಯ ಉಪದೇಶ ನೀಡುತ್ತಿದ್ದರೆ?
أَوْ أَمَرَ بِالتَّقْوَىٰ ۝١٢

13. (ತಡೆಯುವವನಾದ ಈ ವ್ಯಕ್ತಿಯು ಸತ್ಯವನ್ನು) ತಿರಸ್ಕರಿಸುವವನೂ ವಿಮುಖನಾಗುವವನೂ ಆಗಿದ್ದರೆ, ನಿಮ್ಮ ಅಭಿಪ್ರಾಯವೇನು?
أَرَءَيْتَ إِن كَذَّبَ وَتَوَلَّىٰٓ ۝١٣

14. ಅಲ್ಲಾಹನು ನೋಡುತ್ತಿದ್ದಾನೆಂಬುದನ್ನು ಅವನು ತಿಳಿದಿಲ್ಲವೇ?
أَلَمْ يَعْلَم بِأَنَّ اللَّهَ يَرَىٰ ۝١٤

15. ಖಂಡಿತ ಅಲ್ಲ! ಅವನು (ತನ್ನ ನಿಲುವನ್ನು) ತೊರೆಯದಿದ್ದರೆ ನಾವು ಅವನ ಜುಟ್ಟನ್ನು ಹಿಡಿದು ಎಳೆಯುವೆವು.
كَلَّا لَئِن لَّمْ يَنتَهِ لَنَسْفَعًۢا بِالنَّاصِيَةِ ۝١٥

16. ಸುಳ್ಳುಗಾರ ಹಾಗೂ ಮಹಾ ಅಪರಾಧಿ ಜುಟ್ಟನ್ನು.
نَاصِيَةٍ كَٰذِبَةٍ خَاطِئَةٍ ۝١٦

17. ಅವನು ತನ್ನ ಬೆಂಬಲಿಗರ ಹಿಂಡನ್ನು ಕರೆದುಕೊಳ್ಳಲಿ-
فَلْيَدْعُ نَادِيَهُۥ ۝١٧

18. ನಾವೂ ಯಾತನೆ ನೀಡುವ ದೇವಚರರನ್ನು ಕರೆಸಿಕೊಳ್ಳುವೆವು-
سَنَدْعُ الزَّبَانِيَةَ ۝١٨

19. ಖಂಡಿತ ಅಲ್ಲ! ಅವನ ಮಾತನ್ನು ಅನುಸರಿಸಬೇಡಿರಿ, ಸಾಷ್ಟಾಂಗ ವೆರಗಿರಿ ಮತ್ತು (ನಿಮ್ಮ ಪ್ರಭುವಿನ) ಸಾಮೀಪ್ಯ ಪಡೆಯಿರಿ.
كَلَّا لَا تُطِعْهُ وَاسْجُدْ وَاقْتَرِب ۩ ۝١٩ السجدة